# ಅರೆಯೂರಿನ ಸೊಂನಾರಿಯ ಶಿಲಾಶಾಸನ

—ಕೆ. ಬಿ. ಶಿವತಾರಕ್

ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ ಅರೆಯೂರು ಗ್ರಾಮದ ವೈದ್ಯನಾಥೇಶ್ವರ ದೇವಾಲಯ ದಲ್ಲಿರುವ ಪ್ರಸ್ತುತ ಶಿಲಾಶಾಸನವನ್ನು ದೇವಾಲಯದ ಒಂದು ಗರ್ಭಗೃಹದ ಒಳಗೆ ಗೋಡೆಗೆ ಸೇರಿಸಲಾಗಿದೆ. ಈ ದೇವಾಲಯವು ದ್ವಿಕೂಟಾಚಲವಾಗಿದೆ.

ಈ ಅಪ್ರಕಟಿತ ಶಾಸನವು ಅತ್ಯಂತ ಸುರಕ್ಷಿತ ವಾಗಿದೆ. ಆದರೆ ಬರಹವು ಕೆಲವು ಕಡೆ ತೃಟಿತವಾಗಿದೆ. ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯ ಈ ಶಾಸನದಲ್ಲಿ ಒಟ್ಟು ೧೮ ಸಾಲುಗಳಿವೆ. ಕೊನೆಯ ಮೂರು ಸಾಲು ಗಳನ್ನು ಅರ್ಧ ಮಾತ್ರ ಬರೆದಿದ್ದು ಉಳಿದ ಭಾಗದಲ್ಲಿ ಚಿತ್ರವನ್ನು ಕೆತ್ತಲಾಗಿದೆ. ಆ ಚಿತ್ರದಲ್ಲಿ ಇಬ್ಬರು ವ್ಯಕ್ತಿ ಗಳ ಚಿತ್ರಣವಿದ್ದು ಒಂದು ಮಹಿಳೆಯದ್ದು ಇನ್ನೊಂದು ಪುರುಷನದ್ದು. (ಫೋಟೋ ನೋಡಿ).

ಇದು ಒಂದು ಖಾಸಗಿ ದಾನ ಶಾಸನ. ಕಾಲದ ಉಲ್ಲೇಖವನ್ನು ಪ್ರಾರಂಭದಲ್ಲೇ ಕಾಣಬಹುದು. "ಹೇಮ ಳಂಬಿ ಸಂವತ್ಸರದ ಪಾಲ್ಗುಣ ಬಹುಳ ಒಂದು" ಎಂದು ಮಾತ್ರ ಇದೆ. ಲಿಪಿ ಸ್ವರೂಪದ ಪ್ರಕಾರ ಈ ಶಾಸನದ ಕಾಲ ೧೭ನೇ ಶತಮಾನಕ್ಕೆ ಸೇರುವುದರಿಂದ ಈ ಶತಮಾನ ದಲ್ಲಿ ಹೇಮಳಂಬಿ ಸಂವತ್ಸರವು ಕ್ರಿ. ಶ. ೧೬೫೮ನೇ ಫೆಬ್ರವರಿ ೧೭ ಶನಿವಾರ ಬರುವುದರಿಂದ ಇದೇ ವರ್ಷದ್ದಿರ ಬೇಕೆಂದು ತಿಳಿಯಬಹುದು.

ಇದು ಸೊಂನಾರಿ[1] (ವಾದ್ಯಗಾರನಾದ) ನಾಗಪನು ತಮ್ಮ ತಂದೆ ತಾಯಿಗಳಿಗೆ ಪುಣ್ಯವಾಗಲಿ ಎಂದು ಕೊಟ್ಟ ಭೂ ದಾನ ಶಾಸನ. ನಂದಾದೀವಿಗೆಗೆ ಬಿಟ್ಟಂತಹ ಹೊಲ ಎಂದು ಹೇಳಿದೆ. ಆದರೆ ಅದು ಎಲ್ಲಿ ಮತ್ತು ಎಷ್ಟು ಎನ್ನುವ ಬಗ್ಗೆ ವಿವರವಿಲ್ಲ. ಮುಂದಿನ ಭಾಗದಲ್ಲಿ ಶಾಪದ ವಿವರಣೆ ಇದೆ. "ಇದಕ್ಕೆ ಅಳುಪಿದರೆ ಬ್ರಾಹ್ಮಣರನ್ನು ಕೊಂದ ಪಾಪಕ್ಕೆ ಹೋಗುವರು." ಆದರೆ ಇಲ್ಲಿ ಶಾಸನ ಶಿಥಿಲವಾಗಿರುವುದರಿಂದ ಹೆಚ್ಚು ತಿಳಿಯಲು ಸಾಧ್ಯವಿಲ್ಲ.

ಈ ಶಾಸನದ ಕೆಳ ತುದಿಯಲ್ಲಿ ಚಿತ್ರವನ್ನು ಕೊರೆಯಲಾಗಿದೆ. ಈ ಕೆತ್ತನೆ ಅಪರೂಪವಾದುದು. ವಿಜಯನಗರದ ಕಾಲದ ಕೆಲವು ಶಾಸನಗಳಲ್ಲಿ ಅದರಲ್ಲೂ ವಿಶೇಷವಾಗಿ ನಾಯಿಂದರಿಗೆ ನೀಡಿದ ಶಾಸನಗಳಲ್ಲಿ ಕ್ಷೌರಿಕ ಉಪಕರಣಗಳ ಕೆತ್ತನೆಯನ್ನು ಕಾಣಬಹುದಾಗಿದೆ. ವಿಜಯನಗರಕ್ಕೇ ಸೇರಿದ ಮತ್ತಿ ಕೆಲವು ಶಾಸನಗಳಲ್ಲಿ ಶಾಪದ ವಿವರಣೆಯೊಂದಿಗೆ ಅದರ ಕೆತ್ತನೆಯನ್ನೂ ಕಾಣ ಬಹುದು. ಆದರೆ ಪ್ರಸ್ತುತ ಶಿಲಾ ಶಾಸನದಲ್ಲಿ ದಾನಿ ವಾದ್ಯಗಾರ ಮತ್ತು ನರ್ತಿಸುತ್ತಿರುವ ಸ್ತ್ರೀಯನ್ನು ಕೆತ್ತ ಲಾಗಿದೆ. ಇದರಿಂದ ವಾದ್ಯಗಾರರೂ ಕೂಡ ದಾನ ಕೊಡುತ್ತಿದ್ದರೆಂಬ ಅಂಶ ತಿಳಿಯುತ್ತದೆ. ಮೇಲಾಗಿ ಇದು ವಾದ್ಯಗಾರರ ಸಾಮಾಜಿಕ ಉನ್ನತಿಯನ್ನು ಪ್ರತಿ ಬಿಂಬಿಸುತ್ತದೆ.

ಶಾಸನಗಳಲ್ಲಿ ದಾನಿಗಳಾಗಿ ಸಮಾಜದ ಉನ್ನತ ವರ್ಗಕ್ಕೆ ಸೇರಿದ ವ್ಯಕ್ತಿಗಳ ಕೆತ್ತನೆಯನ್ನು ಕಾಣಬಹುದು. ಪ್ರಸ್ತುತ ಶಾಸನದಲ್ಲಿ ದಾನಿ ನಾಗಪನ ಕೆತ್ತನೆ ಇರುವು ದನ್ನೂ ಗಮನಿಸಿದಾಗ ಈ ಪರಂಪರೆ ಸಮಾಜದ ಇತರ ವರ್ಗಗಳ ಮೇಲೂ ಪ್ರಭಾವ ಬೀರಿರುವ ಅಂಶ ಬೆಳಕಿಗೆ ಬರುತ್ತದೆ. ಶಾಸನದಲ್ಲಿ ದಾನಿಯ ಚಿತ್ರವನ್ನು ದಾನಿಯ

ಅಪೇಕ್ಷೆಗನುಸಾರವಾಗಿ ಕೆತ್ತಿರಬೇಕು ಅಥವಾ ಲಿಪಿಕಾರನೇ ಸ್ವಾತಂತ್ರ್ಯ ವಹಿಸಿರಬೇಕು. ವಾದ್ಯಗಾರನ ಸಮ್ಮುಖದಲ್ಲಿ ನರ್ತಿಸುತ್ತಿರುವ ಸ್ತ್ರೀ ಯಾರೆಂದು ಗುರ್ತಿಸಲು ಸಾಧ್ಯವಾಗಿಲ್ಲ.

ಅಗಿನ ಕಾಲದಲ್ಲಿ ವಾದ್ಯಗಾರರನ್ನು ಸೊಂನಾರಿಗಳೆಂದು ಕರೆಯುತ್ತಿದ್ದರು ಎನ್ನುವ ಅಂಶ ತಿಳಿಯುತ್ತದೆ. ಅದೇ ಪದದ ಬಳಕೆ ಸ್ವಲ್ಪ ಬದಲಾವಣೆಯೊಂದಿಗೆ ಈಗಲೂ ಕೂಡ ದಕ್ಷಿಣ ಕರ್ನಾಟಕದಲ್ಲಿ ಬಳಕೆಯಲ್ಲಿದೆ (ಸೊನಾರಿ ಎನ್ನುತ್ತಾರೆ).

**ಶಾಸನದ ಪಾಠ**

೧) (ಹೇ) ಮಳಂಬಿ ಸಂವತ್ಸರದ ಪಾಲ್ಗು
೨) ಣ ಬ ೧ ಲೂ ಸೊಂನಾರಿನಾಗಪ
೩) ತಂಮ ತಂದೆ ತಾಯಿಗೆ ಪುಣ್ಯ
೪) ವಾಗ ಬೇಕು (ಎ) ಂದು
೫) . ಂಗನ ನಂದಾದಿ . . ಬಿಟ್ಟ
೬) ಹೊಲಲು . . . . . ದ
೭) . . . . . . . .
೮) ಲಳಿಯಿದಕೆ ಅಳುಪಿದ
೯) ರೆ ಆತ . . . . .
೧೦) . . . . . . .
೧೧) ಬ್ರಾಂಹಾರನ ಕೊಂದ ಪಾಪ
೧೨) ಕ್ಕೆ ಹೋಹರು . ಡ . ರಬರ
೧೩) ಹ . . . ಮತುಂ . ಪಿದೊನು
೧೪) ಹೆಂಡತಿಯ ಕೊಂದ . . ಪಿಪಿ
೧೫) ಚಕೆತ . . .

1. ಸೊಂನಾರಿ (ಸೊನಾಯಿ, ಸುನಾಯಿ) ಎಂದರೆ a sort of Clarionet ಎಂದು ಕಿಟೆಲ್ ಅವರು ಅರ್ಥೈಸಿದ್ದಾರೆ. Kittle's Kannada-English Dictionary Vol. 4 PP. 1672-
ಡಾ॥ ಎಂ. ಚಿದಾನಂದಮೂರ್ತಿಯವರು ಈ ಪದದ ಬಗ್ಗೆ ಸಲಹೆ ಮತ್ತು ಸೂಚನೆಗಳನ್ನಿತ್ತಿದ್ದಾರೆ. ಅವರಿಗೆ ಕೃತಜ್ಞತೆಗಳು.

* ಈ ಶಾಸನವನ್ನು ಪ್ರತಿ ಮಾಡಲು ಮಿತ್ರರಾದ ಟಿ. ಜಿ. ರಾಜೇಂದ್ರಪ್ರಸಾದ್‌ರವರು ಸಹಾಯ ಮಾಡಿದ್ದಾರೆ.
ಈ ಶಾಸನದ ಪಡಿಯಚ್ಚನ್ನು ಓದಲು ಡಾ॥ ಬಿ, ವಸಂತಶೆಟ್ಟಿ ಪ್ರಾಂಶುಪಾಲರು, ಎಸ್.ಎಂ.ಎಸ್. ಕಾಲೇಜು ಬ್ರಹ್ಮಾವರ ಇವರು ಸಹಕರಿಸಿದ್ದಾರೆ.